# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 479 (622) |
| ಸದಸ್ಯರ ಹೆಸರು | | ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ<br>(ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | | **21.02.2022** |
| ಉತ್ತರಿಸಬೇಕಾದ ಸಚಿವರು | | ಮಾನ್ಯ ಉನ್ನತ ಶಿಕ್ಷಣ ಸಚಿವರು |
| **ಪ್ರಶ್ನೆ** | | **ಉತ್ತರ** |
| ಅ) | ರಾಜ್ಯದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅನ್‌ಸ್ಕಿಲ್ಸ್/ ಅರೆಕಾಲಿಕ ನೌಕರರಾಗಿ ಇಲ್ಲಿಯವರೆಗೆ ಕರ್ತವ್ಯ ನಿರ್ವಹಿಸುತ್ತಿರುವ ಒಟ್ಟು ಗ್ರೂಪ್-ಡಿ ನೌಕರರ ಸಂಖ್ಯೆ ಎಷ್ಟು ; (ಹೆಸರು ಮತ್ತು ವಿಳಾಸ ಸಹಿತ ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಆಇ/3/ಟಿಎಫ್‌ಪಿ/2017, ದಿನಾಂಕ:07.07.2017 ರಲ್ಲಿ ಅಂಶಕಾಲಿಕ, ಅಕುಶಲ/ ಅನಿಪುಣ ಕೆಲಸಗಾರರನ್ನು ನೇಮಿಸಿಕೊಳ್ಳುವುದನ್ನು ನಿರ್ಬಂಧಿಸಿದೆ. ಸರ್ಕಾರದ ಆದೇಶ ಸಂಖ್ಯೆ: ಆಇ/3/ಟಿಎಫ್‌ಪಿ/2012, ದಿನಾಂಕ:25.06.2012 ರನ್ವಯ ಮಾಸಿಕ ಸಂಚಿತ ಸಂಭಾವನೆ ಪಡೆಯುತ್ತಿರುವ ಎಲ್ಲಾ ಅರೆಕಾಲಿಕ, ಅಕುಶಲ ಕೆಲಸದಾಳುಗಳ ಸೇವೆಯನ್ನು ಅವರುಗಳ ನೇಮಕಾತಿ ಅವಧಿ ಪೂರೈಸಿದ ತಕ್ಷಣ ಬರಖಾಸ್ತು/ಮುಕ್ತಾಯ ಮಾಡಲು ಆದೇಶಿಸಲಾಗಿದೆ.<br><br>ಅದರಂತೆ, ರಾಜ್ಯದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅನ್‌ಸ್ಕಿಲ್ಡ್/ ಅರೆಕಾಲಿಕ ಗ್ರೂಪ್-ಡಿ ನೌಕರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದವರನ್ನು ಸೇವೆಯಿಂದ ಬಿಡುಗಡೆ ಮಾಡಲಾಗಿದೆ. ಆದ್ದರಿಂದ ಪ್ರಸ್ತುತ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅನ್‌ಸ್ಕಿಲ್ಡ್/ ಅರೆಕಾಲಿಕ ಗ್ರೂಪ್-ಡಿ ನೌಕರರು ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ. |
| ಆ) | ಸದರಿ ಅನ್‌ಸ್ಕಿಲ್ಸ್/ ಅರೆಕಾಲಿಕ ಗ್ರೂಪ್-ಡಿ ನೌಕರಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಆಯಾಗಳಿಗೆ ನೀಡಿರುವಂತೆ ಕನಿಷ್ಟ ವೇತನ ರೂ.17,000/- ಗಳನ್ನು ನೀಡಲಾಗುವುದೇ ಅಥವಾ ಆದೇಶ ಸಂಖ್ಯೆ: ಇಡಿ 88 ಹೆಚ್‌ಪಿಸಿ 2021, ಬೆಂಗಳೂರು ದಿನಾಂಕ: 24.08.2021 ರಲ್ಲಿ ಗ್ರೂಪ್-ಡಿ ನೌಕರರಿಗೆ ನಿಗಧಿ ಪಡಿಸಿರುವ ರೂ. 18,000/- ವೇತನವನ್ನು ನೀಡಲಾಗುವುದೇ ; (ಸಂಪೂರ್ಣ ಮಾಹಿತಿ ನೀಡುವುದು) | ಪ್ರಸ್ತುತ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಯಾವುದೇ ಅನ್‌ಸ್ಕಿಲ್ಡ್/ ಅರೆಕಾಲಿಕ ಗ್ರೂಪ್-ಡಿ ನೌಕರರು ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲವಾದ್ದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

| | | |
|---|---|---|
| ಇ) | ಅನ್‌ಸ್ಕಿಲ್ಸ್/ ಅರೆಕಾಲಿಕ ಗ್ರೂಪ್ –ಡಿ ನೌಕರರ ಬದಲಿಗೆ ಹೊರಗುತ್ತಿಗೆ ಪದ್ಧತಿಯಲ್ಲಿ ಹೊರಗುತ್ತಿಗೆ ಗ್ರೂಪ್-ಡಿ ನೌಕರರುಗಳನ್ನು ನೇಮಿಸಿಕೊಳ್ಳಲಾಗಿದೆಯೇ ; (ಮಾಹಿತಿ ನೀಡುವುದು) | ಹೌದು,<br>ಅನ್‌ಸ್ಕಿಲ್ಡ್ / ಅರೆಕಾಲಿಕ ಗ್ರೂಪ್-ಡಿ ನೌಕರರ ಬದಲಿಗೆ ಹೊರಗುತ್ತಿಗೆ ಪದ್ಧತಿಯಲ್ಲಿ 347 ಗ್ರೂಪ್-ಡಿ ನೌಕರರುಗಳನ್ನು ನೇಮಿಸಿಕೊಳ್ಳಲು ಕ್ರಮ ವಹಿಸಲಾಗುತ್ತಿದೆ. |
| ಈ) | ನೇಮಿಸಿಕೊಂಡಿದ್ದಲ್ಲಿ, ಹೊರಗುತ್ತಿಗೆ ಪದ್ಧತಿಯನ್ನು ರದ್ದುಪಡಿಸಿ, ಕಳೆದ ಸುಮಾರು 20-25 ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವ ಅನ್‌ಸ್ಕಿಲ್ಸ್/ ಅರೆಕಾಲಿಕ ಗ್ರೂಪ್-ಡಿ ನೌಕರರಿಗೆ ಸೇವಾ ಭದ್ರತೆಯನ್ನು ಒದಗಿಸಲು ಸರ್ಕಾರ ಯಾವ ಕ್ರಮಗೈಗೊಂಡಿದೆ ? (ಸಂಪೂರ್ಣ ಮಾಹಿತಿ ನೀಡುವುದು) | ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅನ್‌ಸ್ಕಿಲ್ಡ್ ನೌಕರರು ಕಾರ್ಯ ನಿರ್ವಹಿಸುತ್ತಿಲ್ಲ. |

**ಸಂಖ್ಯೆ: ಇಡಿ 32 ಯುಇಸಿ 2022**

**(ಡಾ: ಅಶ್ವಥ್ ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.